ಗಿಣಾ ಕ್ಷೇತ್ರ

## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1514
2. ಸದಸ್ಯರ ಹೆಸರು : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ
3. ಉತ್ತರಿಸಬೇಕಾದ ದಿನಾಂಕ : 18.03.2021
4. ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು.

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕಾರವಾರ ಜಿಲ್ಲೆಯ ಹಳಿಯಾಳ ತಾಲ್ಲೂಕಿನಲ್ಲಿ 2018-19ನೇ ಸಾಲಿನಿಂದ ಉಂಟಾದ ಅತೀವೃಷ್ಟಿಯಿಂದಾಗಿ ತಾಲ್ಲೂಕಿನಲ್ಲಿ ಹರಿಯುವ ತಟ್ಟಿ ಹಳ್ಳಕ್ಕೆ ಕೃಷಿ ಭೂಮಿಗೆ ನೀರುಣಿಸಲು ಸಹಾಯವಾಗಲೆಂದು ನಿರ್ಮಿಸಲಾದ 23 ಸಣ್ಣ ಸಣ್ಣ ಬಾಂದಾರುಗಳಲ್ಲಿ, ಹಲವು ಬಾಂದಾರುಗಳು ಭಾಗಶಃ ಹಾಳಾಗಿದ್ದು ಸರ್ಕಾರ 52 ಕೋಟಿ ರೂ. ವೆಚ್ಚದಲ್ಲಿ ದುರಸ್ತಿ ಕಾರ್ಯ ಕೈಗೊಳ್ಳುವಲ್ಲಿ ಅಧಿಕಾರಿಗಳು ಹಾಗೂ ಗುತ್ತಿಗೆದಾರರೂ ಕಳಪೆ ಕಾಮಗಾರಿ ಕೈಗೊಂಡಿದ್ದರಿಂದ ರೈತರು ಸಂಕಷ್ಟ ಎದುರಿಸುವಂತಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | 2018-19ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ ತಾಲ್ಲೂಕಿನಲ್ಲಿ ಅತೀವೃಷ್ಟಿಯಿಂದ ಹಾನಿಗೊಳಗಾದ ಯಾವುದೇ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ.<br><br>2019-20ನೇ ಸಾಲಿನಲ್ಲಿ ಉಂಟಾದ ಅತೀವೃಷ್ಟಿಯಿಂದ ಹಳಿಯಾಳ ತಾಲ್ಲೂಕಿನಲ್ಲಿ ಹರಿಯುವ ತಟ್ಟಿಹಳ್ಳಕ್ಕೆ ಅಡ್ಡಲಾಗಿ ಸಣ್ಣ ನೀರಾವರಿ ಇಲಾಖೆಯಿಂದ ನಿರ್ಮಿಸಲಾದ ಬಂದಾರಗಳಿಗೆ ದೊಡ್ಡ ದೊಡ್ಡ ಮರಗಳು, ಗಿಡಗಂಟಿಗಳು, ಮಣ್ಣು ಬಂದು ಸೇರಿಕೊಂಡು ನೀರು ಹೊರ ಹರಿಯಲು ತೊಂದರೆಯಾಗಿ ಬಂದಾರಗಳ ವಿಂಗ್‌ವಾಲ್, ಕೀ ವಾಲ್, ಬಾಡಿ ವಾಲ್‌ಗಳಿಗೆ ತೀವ್ರತರದಲ್ಲಿ ಹಾನಿಯಾಗುವುದರೊಂದಿಗೆ, ಬಂದಾರದ ಇಕ್ಕೆಲಗಳ ಬಂಡ್ ಕೊರೆದು ನೀರು ಹರಿದು ತೀವ್ರತರದಲ್ಲಿ ಹಾನಿಯಾಗಿರುತ್ತದೆ.<br><br>ಪ್ರವಾಹದಿಂದ ತಟ್ಟಿಹಳ್ಳದಲ್ಲಿನ ಬಂದಾರಗಳಿಗೆ ಹಾನಿಯಾಗಿರುವ ಸಂಬಂಧ 2019-20ನೇ ಸಾಲಿನಲ್ಲಿ ಒಟ್ಟು 27 ಬಂದಾರಗಳ ದುರಸ್ತಿ/ಪುನಶ್ಚೇತನಕ್ಕಾಗಿ ರೂ.12.20 ಕೋಟಿ ಅಂದಾಜು ಮೊತ್ತದ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ಈ ಪೈಕಿ ರೂ.6.58 ಕೋಟಿ ಅಂದಾಜು ಮೊತ್ತದ 18 ಕಾಮಗಾರಿಗಳು ಈಗಾಗಲೇ ಪೂರ್ಣಗೊಂಡಿದ್ದು, ರೂ.5.62 ಕೋಟಿ ಅಂದಾಜು ಮೊತ್ತದ 9 ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ. ಸದರಿ ಕಾಮಗಾರಿಗಳಿಗೆ ಇದುವರೆವಿಗೆ ರೂ.2.349 ಕೋಟಿ ವೆಚ್ಚ ಮಾಡಲಾಗಿದೆ.<br><br>ಮೇಲ್ಕಂಡ ಕಾಮಗಾರಿಗಳನ್ನು ಕೈಗೊಳ್ಳುವಾಗ ಕಾಮಗಾರಿ ಗುಣಮಟ್ಟವನ್ನು ಇಲಾಖೆಯ ಗುಣನಿಯಂತ್ರಣ ವಿಭಾಗದಿಂದ ಪರೀಕ್ಷೆಗೆ ಒಳಪಡಿಸಲಾಗಿದ್ದು ಕಳಪೆ ಕಾಮಗಾರಿಗಳನ್ನು ನಿರ್ವಹಿಸಿರುವುದು ಕಂಡು ಬಂದಿರುವುದಿಲ್ಲ.<br><br>ಪ್ರಗತಿಯಲ್ಲಿರುವ ಕಾಮಗಾರಿಗಳನ್ನು ಶೀಘ್ರವಾಗಿ ಪೂರ್ಣಗೊಳಿಸಿ ರೈತರ ಕೃಷಿ ಜಮೀನುಗಳಿಗೆ ನೀರೊದಗಿಸಲು ಅವಶ್ಯಕ ಕ್ರಮ ವಹಿಸಲಾಗಿದೆ. |
| ಆ | 2020 ರಲ್ಲಿ ಉಂಟಾದ ಭಾರಿ ಪ್ರವಾಹದಿಂದ ದುರಸ್ತಿ ಕಾರ್ಯ ಕೈಗೊಂಡ ಬಾಂದಾರುಗಳು ಕಳಪೆ ಕಾಮಗಾರಿಯಿಂದ. ಕೊಚ್ಚಿಕೊಂಡು ಹೋಗಿದ್ದು, ಇದರಿಂದ ರೈತರು ಬೆಳೆದ | ಸಣ್ಣ ನೀರಾವರಿ ಇಲಾಖೆಯ ವತಿಯಿಂದ ಈಗಾಗಲೇ ದುರಸ್ತಿಕಾರ್ಯ ಪೂರ್ಣಗೊಳಿಸಿರುವ ಬಾಂದಾರಗಳಿಗೆ 2020ರಲ್ಲಿ ಉಂಟಾದ ಭಾರಿ ಪ್ರವಾಹದಿಂದ ಯಾವುದೇ ಹಾನಿ ಸಂಭವಿಸಿರುವುದಿಲ್ಲ.<br>ಪ್ರಗತಿಯಲ್ಲಿದ್ದ ಕಾಮಗಾರಿಗಳನ್ನು ಗುತ್ತಿಗೆದಾರರು ಕೋವಿಡ್-19 ರ |

| | | |
|---|---|---|
| | ಬೆಳೆ ನಷ್ಟವಾಗಿ ತೊಂದರೆ ಅನುಭವಿಸುತ್ತಿದ್ದು ಇದಕ್ಕೆ ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಸರ್ಕಾರ ಕ್ರಮ ಕೈಗೊಳ್ಳುವುದೇ; (ವಿವರ ನೀಡುವುದು) | ಲಾಕ್‌ಡೌನ್ ನಿಂದಾಗಿ ಮತ್ತು ನುರಿತ ಕೆಲಸಗಾರರ ಕೊರತೆಯಿಂದಾಗಿ 2020ರ ಮುಂಗಾರು ಪ್ರಾರಂಭವಾಗುವ ಪೂರ್ವದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ<br>ಹೀಗಾಗಿ ಸದರಿ ಬಾಂದಾರಗಳಲ್ಲಿ ಪೂರ್ಣಪ್ರಮಾಣದಲ್ಲಿ ನೀರನ್ನು ನಿಲ್ಲಿಸಲು ಸಾಧ್ಯವಾಗಿರುವುದಿಲ್ಲ. ಪ್ರಸ್ತುತ ತಟ್ಟಿಹಳ್ಳದಲ್ಲಿ ನೀರಿನ ಹರಿವು ಕಡಿಮೆಯಾದ ಕಾರಣ ಫೆಬ್ರವರಿ ಮೊದಲನೇ ವಾರದಿಂದ 9 ಬಾಂದಾರ ಕಾಮಗಾರಿಗಳ ದುರಸ್ತಿ/ಮುನಶ್ಚೇತನ ಕಾಮಗಾರಿಯನ್ನು ಗುತ್ತಿಗೆದಾರರು ಪ್ರಾರಂಭಿಸಿರುತ್ತಾರೆ.<br>ಒಟ್ಟು 27 ದುರಸ್ತಿ / ಮುನಃ ಶ್ಚೇತನ ಕಾಮಗಾರಿಗಳ ಪೈಕಿ 18 ಕಾಮಗಾರಿಗಳು ಪೂರ್ಣಗೊಂಡಿದ್ದು ಉಳಿದ 9 ಕಾಮಗಾರಿಗಳನ್ನು ಕೋವಿಡ್-19 ಲಾಕ್‌ಡೌನ್‌ನಿಂದ ಕಾಮಗಾರಿ ಪೂರ್ಣಗೊಳಿಸಲು ತೊಂದರೆಯಾದ ಕಾರಣ ನಿಗದಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಗುತ್ತಿಗೆದಾರರಿಗೆ ಸಾಧ್ಯವಾಗಿರುವುದಿಲ್ಲ. ಹೀಗಾಗಿ ಅಧಿಕಾರಿಗಳ ವಿರುದ್ಧ ಕ್ರಮ ವಹಿಸುವ ಪ್ರಶ್ನೆ ಉದ್ಭವಿಸುವುದಿಲ್ಲ.<br>2020ರಲ್ಲಿ ಉಂಟಾದ ಭಾರಿ ಪ್ರವಾಹದಿಂದ ತಟ್ಟಿಹಳ್ಳದಲ್ಲಿ ಹೊಸದಾಗಿ ಯಾವುದೇ ಬಾಂದಾರಗಳಿಗೆ ಹಾನಿಯಾಗಿರುವುದಿಲ್ಲ ಹಾಗೂ ಪ್ರಸಕ್ತ ವರ್ಷದಲ್ಲಿ ಅನುಮೋದನೆ ನೀಡಿರುವ ಸಣ್ಣ ನೀರಾವರಿ ಯೋಜನೆಗಳನ್ನು ಪುನರುಜ್ಜೀವನಗೊಳಿಸುವ ಕಾಮಗಾರಿಗಳ ಪೈಕಿ ತಟ್ಟಿಹಳ್ಳದಲ್ಲಿನ ಬಾಂದಾರಗಳ ದುರಸ್ತಿ/ ಪುನಶ್ಚೇತನ ಕಾಮಗಾರಿಗಳು ಒಳಗೊಂಡಿರುವುದಿಲ್ಲ. |
| ಇ | ಈ ರೀತಿ ಕೋಟ್ಯಾಂತರ ರೂಪಾಯಿ ಅನುದಾನ ದುರಪಯೋಗ ಮಾಡಿಕೊಂಡು ಕೆಲವೊಂದು ಕಾಮಗಾರಿ ಮಾಡಿದ ಅಧಿಕಾರಿಗಳ ಬಗ್ಗೆ ಉನ್ನತ ತನಿಖೆ ಮಾಡಿಸಿ, ಆಗಿರುವ ನಷ್ಟವನ್ನು ಸಂಬಂಧಿಸಿದ ಅಧಿಕಾರಿಗಳಿಂದಲೇ ಭರಿಸಲು ಕ್ರಮ ಕೈಗೊಳ್ಳಲಾಗುವುದೇ? (ವಿವರ ನೀಡುವುದು) | ತಟ್ಟಿಹಳ್ಳದಲ್ಲಿ 2019-20ನೇ ಸಾಲಿನಲ್ಲಿ ಪ್ರವಾಹದಿಂದ ಹಾನಿಗೊಳಗಾದ ಬಾಂದಾರಗಳ ದುರಸ್ತಿ/ಮುನಶ್ಚೇತನ ಕಾಮಗಾರಿಗಳನ್ನು ಗುಣನಿಯಂತ್ರಣ ವಿಭಾಗದಿಂದ ಪರೀಕ್ಷೆಗೆ ಒಳಪಡಿಸಲಾಗಿದ್ದು ಕಾಮಗಾರಿಗಳ ಗುಣಮಟ್ಟವನ್ನು ಕಾಪಾಡಿಕೊಂಡು ಕೈಗೊಳ್ಳಲಾಗುತ್ತಿದೆ ಹಾಗೂ ಅನುದಾನ ದುರುಪಯೋಗ ಮಾಡಿಕೊಂಡಿರುವುದು ಕಂಡುಬಂದಿರುವುದಿಲ್ಲ. ಹೀಗಾಗಿ ಯಾವುದೇ ಅಧಿಕಾರಿಗಳ ಮೇಲೆ ಉನ್ನತ ತನಿಖೆ ನಡೆಸುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಕಡತ ಸಂಖ್ಯೆ: MID 39 LCQ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು.